

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 19-03-2021 ಪ್ರಶ್ನೆ ಸಂಖ್ಯೆ : 240 (1696)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 19-03-2021

ಉತ್ತರಿಸುವ ಸಚಿವರು: ಮೂಲಸೌಲಭ್ಯ ಅಭಿವೃದ್ಧಿ ಹಾಗೂ ಹಜ್ ಮತ್ತು ವಕ್ಫ್ ಸಚಿವರು

ವಿಷಯ : "ಬಾಗಲಕೋಟೆ-ಕುಡಚಿ" ರೈಲು ಮಾರ್ಗ ನಿರ್ಮಾಣ ಕಾಮಗಾರಿಯ ಕುರಿತು

(ಅ) "ಬಾಗಲಕೋಟೆ-ಕುಡಚಿ" ರೈಲು ಮಾರ್ಗ ನಿರ್ಮಾಣ ಕಾಮಗಾರಿಯು ಪ್ರಸುತ್ತ ಯಾವ ಹಂತದಲ್ಲಿದೆ; ಹಾಗೂ ಸದರಿ ಕಾಮಗಾರಿಯನ್ನು ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸಲಾಗುವುದು;

(ಆ) ಸದರಿ ರೈಲು ಮಾರ್ಗದಲ್ಲಿ ಬಾಗಲಕೋಟದಿಂದ "ಲೋಕಾಪುರದವರೆಗಿನ ಮಾರ್ಗವು ಪೂರ್ಣಗೊಂಡಿರುವುದು ನಿಜವೇ;

(ಇ) ಪೂರ್ಣಗೊಂಡಿದ್ದಲ್ಲಿ, ಮುಂದಿನ ಹಂತವಾದ "ಲೋಕಾಪುರದಿಂದ ಕುಡಚಿ" ವರೆಗಿನ ರೈಲು ಮಾರ್ಗದ ನಿರ್ಮಾಣ ಕಾಮಗಾರಿಯನ್ನು ಇನ್ನೂ ಪ್ರಾರಂಭಿಸದೇ ಇರುವುದಕ್ಕೆ ಕಾರಣಗಳೇನು; ಪ್ರಾರಂಭವಾಗಿದ್ದರೆ, ಸದರಿ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ ಹಾಗೂ ಯಾವ ಕಾಲಮಿತಿಯೊಳಗೆ ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು

(ಈ) ಸದರಿ ರೈಲು ಮಾರ್ಗ ನಿರ್ಮಾಣಕ್ಕೆ ಎಷ್ಟು ಎಕರೆ ಭೂ-ಪ್ರದೇಶದ ಅಗತ್ಯವಿದೆ; ಹಾಗೂ ಸದರಿ ಕಾಮಗಾರಿಗೆ ಎಷ್ಟು ಎಕರೆ ಭೂಪ್ರದೇಶವನ್ನು ಭೂ ಸ್ವಾಧೀನ ಪಡಿಸಿಕೊಳ್ಳಲಾಗಿದೆ ಮತ್ತು ಭೂ ಸ್ವಾಧೀನ ಪ್ರಕ್ರಿಯೆ ಪ್ರಸ್ತುತ ಯಾವ ಹಂತದಲ್ಲಿದೆ;

(ಉ) ಭೂ-ಸ್ವಾಧೀನಕ್ಕೆ ಒಳಪಟ್ಟ ಜಮೀನುಗಳ ರೈತರುಗಳಿಗೆ ನೀಡಿದ ಪರಿಹಾರ ಧನವೆಷ್ಟು; (ವಿವರ ನೀಡುವುದು)

(ಊ) "ಬಾಗಲಕೋಟ-ಕುಡಚಿ" ರೈಲು ಮಾರ್ಗ ನಿರ್ಮಾಣ ಕಾಮಗಾರಿಗೆ ತಗಲುವ ಸಂಪೂರ್ಣ ವೆಚ್ಚ ಎಷ್ಟು; ಅದರಲ್ಲಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಭರಿಸಬೇಕಾದ ಹಣಕಾಸಿನ ಪ್ರಮಾಣವೆಷ್ಟು? (ಸಂಪೂರ್ಣ ವಿವರ ನೀಡುವುದು)